ಸಾರ್ವಜನಿಕ ಕುಂದುಕೊರತೆಗಳಿಗೆ ಆಶಾದಾಯಕ ಸಾರ್ವಜನಿಕ ಪರಿಹಾರ

-ಮಾನಬಿ ಮಜುಮ್‌ದಾರ್ ಮತ್ತು ಕುಮಾರ ರಾಣಾ

ನಾವು ಹಲವಾರು ಸಾಮಾಜಿಕ ಉದ್ದೇಶಗಳಿಗಾಗಿ ಒಂದುಗೂಡುತ್ತೇವೆ. 1934-40ರ ಅವಧಿಯಲ್ಲಿ ಬಂಗಾಳದಲ್ಲಾದ ಸ್ವ ವಿನಾಶಕಾರೀ ಘಟನೆಗಳ ಕುರಿತು ಟಾಗೋರರು, ಜನರು ಇಲ್ಲಿ ಯಾವುದನ್ನೂ ಇಷ್ಟಪಟ್ಟಾಗಿ ಸೇರಿಸಿ ಕಟ್ಟಲು ಒಗ್ಗೂಡುವುದಿಲ್ಲ. ಒಗ್ಗೂಡುವುದೇನಿದ್ದರೂ ಕಟ್ಟಿರುವುದನ್ನು ಕೆಡುಹಿ ಆನಂದಿಸಲು ಎಂದು ಪಶ್ಚಾತ್ತಾಪದಿಂದ ಹೇಳಿದ್ದರು. ರಚನಾತ್ಮಕವಾದ ಸಾಮಾಜಿಕ ಧ್ಯೇಯೋದ್ದೇಶಗಳ ಈಡೇರಿಕೆಗೆ ಸಾಮೂಹಿಕ ಪ್ರಯತ್ನದ ಪ್ರತಿ-ಪ್ರವಾಹದ ಕಲ್ಪನೆಯು ಸಾಧ್ಯ ಎಂಬ ಅಂಶವನ್ನು ಈ ಸಂಕ್ಷಿಪ್ತ ಟಿಪ್ಪಣಿಯಲ್ಲಿ ಹೇಳಲಾಗಿದೆ. ಇತ್ತೀಚೆಗೆ ಪ್ರತೀಚಿ (ಇಂಡಿಯಾ) ಟ್ರಸ್ಟ್ ಶಾಂತಿ ನಿಕೇತನದಲ್ಲಿ, ಶಾಲಾ ಆರೋಗ್ಯ ಮತ್ತು ಶಾಲೆಯ ಆರೋಗ್ಯ ಎಂಬ ವಿಷಯದ ಕುರಿತು ಕಾರ್ಯಾಗಾರವೊಂದನ್ನು ಆಯೋಜಿಸಿತ್ತು. ಅದರಲ್ಲಿ ಭಾಗವಹಿಸಿದ್ದ ಶಾಲಾ ಶಿಕ್ಷಕರು, ಅಂಗನವಾಡಿ ಕಾರ್ಯಕರ್ತರು, ಆರೋಗ್ಯ ಕಾರ್ಯಕರ್ತರು ಹಾಗೂ ಹಲವಾರು ತಳ ಹಂತದ ಶಿಕ್ಷಣ ಮತ್ತು ಆರೋಗ್ಯ ಅಧಿಕಾರಿಗಳ ದೈನಂದಿನ ಪ್ರಯತ್ನಗಳು ಹಾಗೂ ಅನುಭವವನ್ನು ಈ ವರದಿಯು ಆಧರಿಸಿದೆ. ಸಾರ್ವಜನಿಕ ಕುಂದುಕೊರತೆಗಳನ್ನು ನೀಗಿಸುವ ನಿಟ್ಟಿನಲ್ಲಿ ಯಾವುದೇ ಅತೀತ ಶಕ್ತಿಗಳನ್ನು ಹೊಂದಿಲ್ಲದ ನಮ್ಮ ನಿಮ್ಮಂಥ ಜನರ ಗುಂಪೊಂದು ಸಹಕಾರ ನೀಡುವ ಇಚ್ಛೆ ಮತ್ತು ನಿರ್ಧಾರಗಳ ಸ್ಥೂಲ ಚಿತ್ರಣವನ್ನು ಇದು ನೀಡುತ್ತದೆ.

ಎಲ್ಲ ಸರ್ಕಾರೀ ಸಂಸ್ಥೆಗಳನ್ನು ಅದು ಸರ್ಕಾರೀ ಶಾಲೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಅಥವಾ ಅಂಗನವಾಡಿ ಕೇಂದ್ರ ಯಾವುದೇ ಇರಬಹುದು (ಸೇನೆಯೊಂದನ್ನು ಹೊರತುಪಡಿಸಿ) ಅವೆಲ್ಲವುಗಳನ್ನೂ ಬಹಳಷ್ಟು ಬಾರಿ ವ್ಯರ್ಥವಾದವು ಹಾಗೂ ಪರಿಣಾಮಕಾರಿಯಲ್ಲದವು ಎಂಬ ಅಭಿಪ್ರಯವೇ ಎಲ್ಲ ಸಾರ್ವಜನಿಕ ಮತ್ತು ಕಾರ್ಯನೀತಿಗಳ ಸಂವಾದಗಳಲ್ಲಿ ವ್ಯಕ್ತವಾಗುತ್ತದೆ. ಸದ್ಯ ಬಲವಾಗಿರುವ, ಸಂವಾದಗಳಲ್ಲಿ ಅವು ವ್ಯವಸ್ಥೆಯನ್ನು ವಿಫಲಗೊಳಿಸುತ್ತವೆ ಎಂದು ಮುಂಚಿತವಾಗಿ ಹೇಳಲಾಗಿದೆ. ಸಾರ್ವಜನಿಕ ಎನ್ನಿಸಿಕೊಳ್ಳುವ ಯಾವುದೇ ಸಂಗತಿಯ ವಿರುದ್ಧ ಇರುವ ಒಂದು ಸಾಮಾನ್ಯ ಅಪನಂಬಿಕೆ ಹಾಗೂ ಅದಕ್ಕೆ ಪ್ರತಿಸ್ಪಂಧನೆಯಾಗಿ ಪ್ರತ್ಯೇಕವಾದ, ವಿಶೇಷವಾದ - ಖಾಸಗೀ ವೈದ್ಯರು, ಖಾಸಗೀ ಭೋದಕರು, ಖಾಸಗೀ ಸಾರಿಗೆ, ಆವರಣದೊಳಗಿನ ವಸತಿ ಸಂಕೀರ್ಣ, ಅಷ್ಟೇ ಏನು, ಖಾಸಗೀ ಓಣಿ, ಬೇಲಿ ಹಾಕಿದ ಪಾದಚಾರಿ ಮಾರ್ಗಗಳೂ ಸೇರಿದಂತೆ-ಖಾಸಗೀ ಪರ್ಯಾಯವೊಂದರ ಕುರಿತಾದ ತುಡಿತದೆ. ಇದಕ್ಕೆ ಇದಿರಾಗಿ ಈ ಸಭೆಯಲ್ಲಿ ಭಾಗವಹಿಸಿದ ಅನೇಕರು ಸಾರ್ವಜನಿಕ ಸಂಸ್ಥೆಗಳನ್ನು ಅವುಗಳಲ್ಲಿ ಸಮಾನತೆಯ ಸಂಭಾವ್ಯತೆ ಇರುವ ಕಾರಣ ಸಮರ್ಥಿಸಬೇಕಾದ ಅಗತ್ಯವನ್ನೂ ಮತ್ತು ಅವುಗಳಲ್ಲಿನ ಗುಣಮಟ್ಟದ ಕೊರತೆಯನ್ನು ಸುಧಾರಿಸಬೇಕಾದ ಅವಶ್ಯಕತೆಯನ್ನೂ ಬಲವಾಗಿ ಪ್ರತಿಪಾದಿಸಿದರು. ಮನೆ ಮತ್ತು ಶಾಲೆಗಳ ನಡುವೆ ಪ್ರಬಲ ಮತ್ತು ಧನಾತ್ಮಕ ಕೊಂಡಿಯೊಂದನ್ನು ಬೆಸೆಯಲು, ಪೂರ್ವ-ಪ್ರಾಥಮಿಕ ಮಕ್ಕಳಿಗೆ ಪೌಷ್ಟಿಕತೆಯನ್ನು ಒದಗಿಸುವುದರಲ್ಲಿ ಮತ್ತು ಆರೋಗ್ಯದ ವಿಷಯದಲ್ಲಿ ತಾಯಂದಿರು ಸಕ್ರಿಯವಾಗಿ ತೊಡಗುವಂತೆ ಅವರನ್ನು ಉತ್ತೇಜಿಸಲು, ಮಕ್ಕಳ ದೈಹಿಕ, ಭಾವನಾತ್ಮಕ ಮತ್ತು ಅರಿವಿನ ಅಭಿವೃದ್ಧಿ ಇತ್ಯಾದಿಗಳನ್ನು ಹೆಚ್ಚಿಸುವ ನಿಟ್ಟಿನಲ್ಲಿ ಶಾಲೆ ಮತ್ತು ಆರೋಗ್ಯ ಕೇಂದ್ರಗಳ ನಡುವೆ ಉತ್ತಮ ಹೊಂದಾಣಿಕೆ ಇರುವಂತೆ ನೋಡಿಕೊಳ್ಳುವುದು ಹೀಗೆ ತಮ್ಮ ಪ್ರಭಾವದ ಪರಿಧಿಯಲ್ಲಿಯೇ ತಾವು ಕೈಗೊಂಡ ಕ್ರಮಗಳನ್ನು ಅವರು ವಿವರಿಸಿದರು. ಈ ಚಟುವಟಿಕೆಗಳು ಎರಡು ವಿಶಿಷ್ಟ ಹಾಗೂ ಸಮಾನರೂಪದಲ್ಲಿ ಸವಾಲೆಸೆಯುವ ಕಾರ್ಯಗಳಿಗೆ ಗಮನ ನೀಡುತ್ತವೆ; ಅವುಗಳೆಂದರೆ, ಉತ್ತಮ ಸೌಲಭ್ಯ ಹಾಗೂ ಸೇವೆಗಳಿಗೆ ಬೇಡಿಕೆಯನ್ನು ಸೃಷ್ಟಿಸುವುದು ಮತ್ತು ಇಂತಹ ಬೇಡಿಕೆಗಳನ್ನು ಈಡೇರಿಸುವುದಕ್ಕಾಗಿ ಸಾಮೂಹಿಕ ಕ್ರಮವನ್ನು ಸಂಘಟಿಸುವುದು.

**ಶಾಲಾ ಆರೋಗ್ಯ ಮತ್ತು ಸಮಾಜದ ಆರೋಗ್ಯ**

ಉದಾಹರಣೆಗೆ, ಆರೋಗ್ಯ ಕಾರ್ಯಕರ್ತರೊಬ್ಬರು, ಕೆಲವು ಸನ್ನಿವೇಶಗಳಲ್ಲಿ ಹಾಲೂಡಿಸುವ ಮತ್ತು ಗರ್ಭಿಣಿ ತಾಯಂದಿರು ಕಬ್ಬಿಣಾಂಶದ ಮಾತ್ರೆಗಳನ್ನು ತೆಗೆದುಕೊಳ್ಳುವಾಗ ಅದು ದೇಹದಲ್ಲಿ ಸರಿಯಾಗಿ ಹೀರಿಕೊಳ್ಳಲ್ಪಡುವುದಕ್ಕೆ ಅಗತ್ಯವಾಗಿ ತೆಗೆದುಕೊಳ್ಳಬೇಕಿರುವ ವಿಟಮಿನ್ ಸಿ ಯನ್ನು ಜೊತೆಗೇ ತೆಗೆದುಕೊಳ್ಳಲು ಸಾಕಷ್ಟು ಗಮನವನ್ನು ಏಕೆ ನೀಡುವುದಿಲ್ಲ ಎಂಬುದನ್ನು ಸೂಕ್ತ ವಿವರಗಳೊಂದಿಗೆ ವಿವರಿಸಿದ್ದಷ್ಟೇ ಅಲ್ಲದೇ, ತಾಯಂದಿರ ರಕ್ತಹೀನತೆಗೆ ಕಾರಣವಾಗುವ ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳ ಮದುವೆ ಇತ್ಯಾದಿ ಸಮಾಜದಲ್ಲಿನ ಪ್ರಮುಖ ಒತ್ತಡಗಳ ಮೇಲೂ ಬೆಳಕು ಚೆಲ್ಲಿದರು. ತಾವು ಗ್ರಹಿಸಿದುದನ್ನು ಅವರು ನಾವು ಇಡೀ ಸಮಾಜವನ್ನು ಈ ಕುರಿತು ಎಚ್ಚರಗೊಳಿಸದೇ ಹೋದರೆ, ನಮ್ಮ ಪ್ರಯತ್ನಗಳು ನಿಷ್ಫಲವಾಗಿ ಉಳಿದುಬಿಡುತ್ತವೆ, ಎಂದು ಅಭಿಪ್ರಾಯ ಪಟ್ಟರು. ಜೊತೆಗೆ, ಪ್ರಾಥಮಿಕ ಶಾಲಾ ಶಿಕ್ಷಕರ ತಂಡವೊಂದು, ತಮ್ಮ ಶಾಲೆಗೆ ಹೊಂದಿಕೊಂಡಂತೆ ಇರುವ ನೆರೆಕೆರೆಯಲ್ಲಿ ಸಾರ್ವಜನಿಕ ಸ್ವಾಸ್ಥ್ಯದ ಕುರಿತಂತೆ ಸಮೀಕ್ಷೆಯೊಂದನ್ನು ನಡೆಸಲು ತಾವು ತಮ್ಮ ಶಾಲೆಯ ಮಕ್ಕಳನ್ನೇ ತೊಡಗಿಸಿದ ಅನುಭವವನ್ನು ಹಂಚಿಕೊಂಡಿತು. ಸಮೀಕ್ಷೆಯನ್ನು ಕೈಗೊಂಡಾಗ, ಸಂಬಂಧ ಪಟ್ಟ ವಿದ್ಯಾರ್ಥಿಗಳು ತಮ್ಮ ಪ್ರದೇಶದಲ್ಲಿ ಇರುವ ನೈರ್ಮಲ್ಯ ಮತ್ತು ಕುಡಿಯುವ ನೀರಿನ

ಸೌಲಭ್ಯಗಳ ನೈಜ ಚಿತ್ರಣವನ್ನು ಪಡೆದರು ಹಾಗೂ ತಮ್ಮ ಸುತ್ತಲಿನ ವಾಸ್ತವಿಕತೆಯ ಕುರಿತಂತೆ ಸಾಮಾಜಿಕ ಅರಿವನ್ನು ಬೆಳೆಸಿಕೊಂಡರು. ಮೊದಲನೆಯ ಸುತ್ತಿನ ಸಮೀಕ್ಷೆಯ ನಂತರ, ಅದರಲ್ಲಿ ಪಾಲ್ಗೊಂಡಿದ್ದ ಮಗುವೊಂದು ತನ್ನ ಶಿಕ್ಷಕರನ್ನು, ಗುರುಗಳೇ,ದಯವಿಟ್ಟು ನನ್ನನ್ನು ಶ್ರೀಮಂತರ ಮನೆಗೆ ಕಳುಹಿಸಬೇಡಿ. ಅವರು ನನ್ನನ್ನು ತಿರಸ್ಕರಿಸುತ್ತಾರೆ ಎಂದು ವಿನಂತಿಸಿಕೊಂಡಿತು. ಹೀಗೆ ಮಗುವು ನಾವು ಬದುಕುತ್ತಿರುವ ಶ್ರೇಣೀಕೃತ ಸಮಾಜದ ಬಗ್ಗೆ ಅರಿವನ್ನು ಪಡೆಯುತ್ತದೆ ಎನ್ನುವುದನ್ನು ಸಭಿಕರಿಗೆ ಶಿಕ್ಷಕರು ನೆನಪಿಸಿದರು. ಮಕ್ಕಳಲ್ಲಿ ಸಕ್ರಿಯ ಪೌರತ್ವದ ಪ್ರಜ್ಞೆಯನ್ನು ಬೆಳೆಸುವುದರಲ್ಲಿ ಈ ಶಿಕ್ಷಕರ ಕಲ್ಪನಾಶಕ್ತಿ ಹಾಗೂ ಶ್ರದ್ಧೆ, ಆಸಕ್ತಿಗಳನ್ನು ಗಮನಿಸದಿರಲು ಸಾಧ್ಯವೇ ಇಲ್ಲ. ಲೋಕ ಜ್ಞಾನ ಎನ್ನುವುದು ಖಂಡಿತವಾಗಿಯೂ ಎಲ್ಲಾ ಕಾಲದಲ್ಲಿಯೂ ಉಪಯುಕ್ತವಾಗಿಯೇ ಇರಬೇಕೆಂದಿಲ್ಲ. ಆದರೆ, ಈ ವಿಚಾರದಲ್ಲಿ ತೋರಿದ ಬುದ್ಧಿವಂತಿಕೆ ಮತ್ತು ವಿವೇಕವು ಮಕ್ಕಳಲ್ಲಿ ನಾಗರಿಕ ಕಾಳಜಿಯನ್ನು ಬೆಳೆಸುವ ನಿಟ್ಟಿನಲ್ಲಿ ಸಾಕಷ್ಟು ಕೆಲಸ ಮಾಡಬಲ್ಲದು.

ಕಾರ್ಯಾಗಾರದಲ್ಲಿ ಮಾತನಾಡಿದ ಬಹಳಷ್ಟು ಜನರು ಮಕ್ಕಳಲ್ಲಿ ನೈರ್ಮಲ್ಯ, ಕೈಗಳ ಸ್ವಚ್ಛತೆ ಮತ್ತು ಶೌಚಾಲಯ ಬಳಕೆಗಳ ಕುರಿತಂತೆ ಆರೋಗ್ಯಕರ ಅಭ್ಯಾಸಗಳನ್ನು ಬೆಳೆಸಲು ತಾವು ಕೈಗೊಂಡ ಹೊಸ ಹೊಸ ವಿಧಾನಗಳ ಬಗ್ಗೆ ಹೇಳಿದರು. ಭಾರತದ ಅನೇಕ ಭಾಗಗಳಲ್ಲಿ ಮನೆಯ ಆವರಣದಲ್ಲಿಯೇ ಶೌಚಾಲಯಗಳು ಇರುವಾಗಲೂ ಕೆಲವರು ಶೌಚಕ್ಕೆ ಇನ್ನೂ ಬಯಲನ್ನೇ ಬಳಸುತ್ತಾರೆ ಎಂದು ಸಂಶೋಧನೆಯು ಹೇಳುತ್ತದೆ. ಹಾಗಾಗಿ ಶೌಚಾಲಯ ಬಳಕೆಯು ಅದು ಲಭ್ಯವಿದೆ ಎಂಬುದನ್ನಷ್ಟೇ ಅವಲಂಬಿಸಿಲ್ಲ. ಅದಕ್ಕೆ ವರ್ತನೆಯಲ್ಲಿನ ಬದಲಾವಣೆಯೂ ಅಗತ್ಯ. ಈ ಮನೋಭಾವ ಬದಲಾವಣೆಯ ಉದ್ದೇಶವನ್ನು ಇನ್ನಷ್ಟು ಉತ್ತೇಜಿಸಲು ಶಾಲೆಯು ಏನು ಮಾಡಬಹುದು ಎನ್ನುವುದಕ್ಕೆ ಶಾಲಾ ಶಿಕ್ಷಕರೊಬ್ಬರು ಒಂದು ಉದಾಹರಣೆಯನ್ನು ಕೊಟ್ಟರು. ಬಹುತೇಕ ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಜಾತಿಯ ಕುಟುಂಬಗಳೇ ಇರುವ ಹಳ್ಳಿಯೊಂದರಲ್ಲಿ ಒಂಬತ್ತು ವರ್ಷಗಳ ಹಿಂದೆ ಎರಡೇ ಎರಡು ಶೌಚಾಲಯಗಳಿದ್ದವು. ಈಗ ಸರ್ಕಾರದಿಂದ ಕೊಡಮಾಡುವ ಸಾಧಾರಣ ಮಟ್ಟದ ಧನಸಹಾಯವೊಂದರ ಕಾರಣ ಪ್ರತೀ ಮನೆಯೂ ಶೌಚಾಲಯವನ್ನು ಕಟ್ಟಿಕೊಂಡಿದೆ. ಆದರೆ, ಇದು ಆಗಿದ್ದು ಮುಖ್ಯವಾಗಿ ಸ್ಥಳೀಯ ಶಾಲೆಯೊಂದರ ಪ್ರಯತ್ನದ ಫಲವಾಗಿ. ಪ್ರತೀ ಮನೆಯಿಂದಲೂ ತ್ಯಾಜ್ಯವನ್ನು ಸಂಗ್ರಹಿಸುವುದು ಮತ್ತು ಅದರ ಸಮರ್ಪಕ ವಿಲೇವಾರಿಯು ಕೂಡ ಎಲ್ಲರೂ ಒಪ್ಪಿ ಅನುಸರಿಸುತ್ತ ಬಂದ ಅಭ್ಯಾಸವಾಗಿದೆ. ಶಾಲೆಯಲ್ಲಿ ಕೊಡುವ ಬಿಸಿ ಊಟವನ್ನು ಸರಿಯಾದ ಅಡುಗೆ ಮನೆಯೊಂದರಲ್ಲಿ ತಯಾರಿಸುವುದು, ಪಾತ್ರೆಗಳನ್ನು ಸ್ವಚ್ಛಗೊಳಿಸುವುದು, ಊಟದ ಮೊದಲು ಮತ್ತು ನಂತರ ಕೈ ತೊಳೆಯುವುದು ಇವೆಲ್ಲವೂ ಈ ಶಾಲೆಯ ಬದುಕಿನ ದಿನನಿತ್ಯದ ಸಂಗತಿಯಾಗಿದೆ. ಶಾಲೆಯ ಬೀಗದಕೈಗಳು ಹಳ್ಳಿಯ ಜನರ ಕೈನಲ್ಲೇ ಇರುತ್ತವೆ. ಆರೋಗ್ಯ ಮತ್ತು ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ICDS-Integrated Child Development Scheme) ಕಾರ್ಯಕರ್ತರು, ಶಿಕ್ಷಕರು ಪರಸ್ಪರರೊಡನೆ ನಿಯಮಿತವಾದ ಸಂಪರ್ಕದಲ್ಲಿರುತ್ತಾರೆ. ಶಾಲಾ ಶಿಕ್ಷಕರ ಮಾತಿನಲ್ಲಿಯೇ ಹೇಳುವುದಾದರೆ, ನಾವು ಹಳ್ಳಿ ಮತ್ತು ಶಾಲೆಯನ್ನು ಬೆಸೆದಿದ್ದೇವೆ. ಶಾಲೆಯು ಇಡೀ ಹಳ್ಳಿಗೆ ಸೇರಿದ ಸಾಮುದಾಯಿಕ ಸ್ವತ್ತಾಗಿದೆ.

ಮಕ್ಕಳಿಗೆ ಭಾಷೆ, ಗಣಿತ, ಇತಿಹಾಸ ಇತ್ಯಾದಿಗಳಿಗೆ ಸಂಬಂಧಿಸಿದ ಮೂಲಭೂತ ತರಬೇತಿಯನ್ನು ಕೊಡುತ್ತಲೇ ನಮ್ಮಸುತ್ತಮುತ್ತಲಿನ ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಸರ್ಕಾರೀ ಶಾಲೆಯೊಂದು ಏಕಾಕಿಯಾಗಿ ನಿಭಾಯಿಸಬೇಕು ಎಂದು ನಿರೀಕ್ಷಿಸುವುದು ಸರಿಯಲ್ಲ. ಆದರೂ ಈ ಸಾರ್ವಜನಿಕ ಸಂಸ್ಥೆಯುತಾತ್ತ್ವಿಕವಾಗಿ ಸಮುದಾಯದ, ಸಮಾಜದ ವಿವಿಧ ಶ್ರೇಣಿ, ಪದರುಗಳನ್ನು ಸ್ಪರ್ಶಿಸಿ, ಕೆದಕಿ ಪ್ರಶ್ನಾರ್ಹವಾದ ವರ್ತನಾ ನಿಯಮಗಳನ್ನು ಮತ್ತು ಸಾಮಾಜಿಕ ಆಚರಣೆಗಳನ್ನು ಜನರು ಮರುಪರಿಶೀಲಿಸುವಂತೆ ಮಾಡಬಲ್ಲದು. ಶಾಲೆಯು ಮಕ್ಕಳ ಮೂಲಕ ಸಾಮಾಜಿಕ ಸ್ಥಳಾವಕಾಶವನ್ನು (space) ಪ್ರವೇಶಿಸುವ ಪ್ರಯತ್ನಕ್ಕೆ ಬಾಗಿಲಾಗಬಹುದು. ಶಾಲೆಯೆಂಬ ಪ್ರಪಂಚವೊಂದನ್ನು ಹೇಗೆ ಸೃಜನಾತ್ಮಕವಾಗಿ ವಿನ್ಯಾಸಗೊಳಿಸಲು ಆ ಮೂಲಕ ಸಾಮಾಜಿಕ ಲೋಕವನ್ನು ರೂಪಿಸಲು ಸಾಧ್ಯ ಎಂಬುದನ್ನು ಶಿಕ್ಷಕರೊಬ್ಬರು ಹೀಗೆ ವರ್ಣಿಸಿದ್ದಾರೆ, ಮಕ್ಕಳು ಸಾಕಷ್ಟು ಚಿಕ್ಕವರಿರುವಾಗಲೇ ಸ್ವಚ್ಛತೆಯ ಅಭ್ಯಾಸಗಳನ್ನು ರೂಢಿಸಿಬಿಟ್ಟರೆ ನಮಗೆ ಸಾಮಾಜಿಕ ಆರೋಗ್ಯವನ್ನು ಸುಧಾರಿಸುವುದು ಸುಲಭವಾಗುತ್ತದೆ. ನಮ್ಮ ಮಕ್ಕಳೇ ಕಲಿತದ್ದನ್ನು ಮನೆಗೆ ದಾಟಿಸುತ್ತಾರೆ.

ಸಮುದಾಯದುದ್ದಕ್ಕೂ ಶಾಲೆಗಳಲ್ಲಿ ಮೂಲ ಆರೋಗ್ಯ ಸೌಕರ್ಯಗಳನ್ನು ಕುರಿತು ಪ್ರಚಾರ, ಆಂದೋಲನಗಳಾದಾಗ, ಸಾಧಾರಣವಾಗಿ ಜಡವಾಗಿರುವ ಅಧಿಕಾರಶಾಹಿ ನೀತಿನಿಯಮಗಳು ಹಾಗೂ ಕಾರ್ಯವಿಧಾನಗಳೂ ಕೂಡ ಸ್ವಲ್ಪ ವೇಗ ಮತ್ತು ಚೈತನ್ಯವನ್ನು ಪಡೆದುಕೊಳ್ಳಬಹುದು. ಇಂತಹ ಸಾಮೂಹಿಕ ಉಪಕ್ರಮಗಳನ್ನು ಮುನ್ನಡೆಸುವ ಶಾಲಾ ಶಿಕ್ಷಕರ ಗುಂಪೊಂದು ಸಾರ್ವಜನಿಕ ಆರೋಗ್ಯ ತಂತ್ರಜ್ಞಾನ ಇಲಾಖೆಯಲ್ಲಿನ (Department of public health engineering) ಸ್ಥಳೀಯ ಅಧಿಕಾರಿಗಳ ಜೊತೆ ಹಲವಾರು ಸಭೆಗಳನ್ನು ನಡೆಸಿದರು ಹಾಗೂ ವಿಶೇಷವಾಗಿ PHE ನೀಡುವ ನೀರಿನ ವ್ಯವಸ್ಥೆಯು ತಮ್ಮ ಶಾಲೆಗೆ ಕೇವಲ 160 ಮೀಟರ್ ದೂರದಲ್ಲಿರುವುದರಿಂದ ಕುಡಿಯುವ ನೀರನ್ನು ಒದಗಿಸುವುದಕ್ಕಾಗಿ ಶಾಲೆಯನ್ನು PHE ವ್ಯವಸ್ಥೆಗೆ ಸಂಪರ್ಕಿಸುವಂತೆ ಆಗ್ರಹಿಸಿದರು. ಅವರ ಎಡಬಿಡದ ಪ್ರಯತ್ನಗಳು ಫಲ ನೀಡಿದವು: ಈಗ ಶಾಲೆಯಲ್ಲಿ ಕೈ ತೊಳೆಯಲು ತೊಟ್ಟಿಯಿದೆ, ನೀರಿನ ಸಂಗ್ರಹಕ್ಕೆ ಅನುಕೂಲತೆಯಿದೆ ಹಾಗೂ ಸುರಕ್ಷಿತವಾದ ಕುಡಿಯುವ ನೀರಿನ ಪೂರೈಕೆ ಇದೆ. ಶಿಕ್ಷಕರೊಬ್ಬರು ಹೇಳಿದಂತೆ, ಆರ್‌ಟಿಇ ನಿರ್ದೇಶಿಸಿದ ಹಾಗೆ ನಾವು ಆರೋಗ್ಯಕರ ಶಾಲಾ ಪರಿಸರವನ್ನು ನಿರ್ಮಿಸಲು ಪ್ರಯತ್ನಿಸುತ್ತಿದ್ದೇವೆ. ಅದೇ ರೀತಿಯಲ್ಲಿ, ಸಾಮಾನ್ಯವಾಗಿ ಅನಾದರಕ್ಕೊಳಗಾದ ಬಡ ಮಕ್ಕಳ ಪೌಷ್ಟಿಕತೆಯ ಸಮಸ್ಯೆಗೂ ಕೂಡ ಬಂಗ್ಲಾದೇಶದ ಗಡಿಯಲ್ಲಿನ ಪಶ್ಚಿಮ ಬಂಗಾಳದ ಬಡಪ್ರದೇಶದಲ್ಲಿ ಕೇಂದ್ರವೊಂದನ್ನು ನಡೆಸುವ ICDS ಕಾರ್ಯಕರ್ತೆಯೊಬ್ಬರ ದೃಢ ಪ್ರಯತ್ನದಿಂದಾಗಿ ಪರಿಹಾರ ದೊರಕಿದಂತಾಗಿದೆ. ಪೂರ್ವ-

ಪ್ರಾಥಮಿಕ ಮಕ್ಕಳಿಗೆ ಈ ಸಾರ್ವಜನಿಕ ಪೌಷ್ಟಿಕ ಯೋಜನೆಯ ಫಲವು ದೊರೆಯುವಂತೆ ಮಾಡಲು ಅವರು ಎಲ್ಲ ಅಡ್ಡಿ ಆತಂಕಗಳನ್ನೂ ಮೀರಿ ಪ್ರಯತ್ನಿಸುತ್ತಿದ್ದಾರೆ. ಈ ಮಕ್ಕಳ ತಾಯಂದಿರ ಜೊತೆ ಕಷ್ಟಪಟ್ಟು ವಿಶ್ವಾಸ, ಸ್ನೇಹದ ಸಂಬಂಧವನ್ನು ಬೆಳೆಸಿಕೊಂಡು, ಸರ್ಕಾರ ಒದಗಿಸುವ ಅಲ್ಪ ಪ್ರಮಾಣದ ಸಾಮಗ್ರಿಗಳಿಗೆ ಪೂರಕವಾಗಿ, ಅವರು ತಮ್ಮ ನೆಲದಲ್ಲಿ ಬೆಳೆದ ಹಣ್ಣು ತರಕಾರಿಗಳಲ್ಲಿ ಸಾಧ್ಯವಾದಷ್ಟನ್ನು ಅಂಗನವಾಡಿಯ ಅಡುಗೆಮನೆಗೆ ಕೊಡುವಂತೆ ಮನವೊಲಿಸಿದರು. ತಾಯಂದಿರು ತಮ್ಮಲ್ಲೇ ಚಿಕ್ಕ ಚಿಕ್ಕ ಗುಂಪುಗಳನ್ನಾಗಿ ಮಾಡಿಕೊಂಡು ಸರದಿಯಂತೆ ವಾರದ ನಿಗದಿತ ದಿನದಂದು ಕೇಂದ್ರಕ್ಕೆ ಆ ಪದಾರ್ಥಗಳನ್ನು ತಂದು ನೀಡುತ್ತಾರೆ. ಅದಗಾಲೇ ಬಡತನದಲ್ಲಿ ನರಳುತ್ತಿರುವ ಈ ಕುಟುಂಬಗಳ ಮೇಲೆ ಅನಗತ್ಯ ಒತ್ತಡವನ್ನು ಹೇರದಂತೆ ಕಾರ್ಯಕರ್ತೆಯು ಕಾಳಜಿ ವಹಿಸುತ್ತಾರೆ. ದಾರಿದ್ರ್ಯದಿಂದ ಬಳಲುವ ಈ ಪ್ರದೇಶದ ನಿರ್ಗತಿಕ ನಿವಾಸಿಗಳು ಶಿಕ್ಷಕಿಯ ಪ್ರಸ್ತಾವನೆಯನ್ನು ಮೆಚ್ಚಿ, ಉದಾರವಾಗಿ ಸ್ಪಂದಿಸಿದ್ದಾರೆ. ಅದರ ಫಲವಾಗಿ, ಈ ಕೇಂದ್ರದ ಕಾರ್ಯ ನಿರ್ವಹಣೆಯಲ್ಲಿ ಗಮನಾರ್ಹ ಸುಧಾರಣೆಯಾಗಿದೆ. ಅವರ ಸಾಮೂಹಿಕ ಪ್ರಯತ್ನವು ಜಿಲ್ಲಾ ದಂಡಾಧಿಕಾರಿಗಳ ಗಮನವನ್ನೂ ಸೆಳೆದಿದೆ. ಅವರು ಜಿಲ್ಲೆಯ ಇತರ ICDS ಕೇಂದ್ರಗಳಿಗೆ ಈ ಪ್ರಯೋಗದಿಂದ ಕಲಿಯುವಂತೆ ಉತ್ತೇಜನ ನೀಡಿದ್ದೊಂದೇ ಅಲ್ಲದೇ, ಬಹುಶಃ ಸಾರ್ವಜನಿಕ ಕ್ರಿಯಾಶೀಲತೆಯಲ್ಲಿನ ಈ ಸಹಜತೆ, ಸರಳತೆಯನ್ನು ಮೆಚ್ಚಿ, ಜಿಲ್ಲೆಯಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಸರ್ಕಾರದ ಹಂಚಿಕೆಯ ಮೊತ್ತವನ್ನು ಹೆಚ್ಚಿಸಿ ಆಜ್ಞೆ ಹೊರಡಿಸಿದರು.

ದೊಡ್ಡ ದೊಡ್ಡ ಯೋಜನೆಗಳು ಮತ್ತು ಬೃಹತ್ ಸಂರಚನೆಗಳು ಏಕೆ ಕೆಲಸ ಮಾಡುತ್ತವೆ ಅಥವಾ ಮಾಡುವುದಿಲ್ಲ ಎನ್ನುವುದನ್ನು ಅರಿತುಕೊಳ್ಳಲು ಈ ಚಿಕ್ಕ ವಿವರಗಳು ನಮಗೆ ಮುಖ್ಯವಾಗುತ್ತವೆ. ಕಷ್ಟಕರವಾದರೂ ಕೂಡ ಒಬ್ಬ ಶಾಲಾ ಶಿಕ್ಷಕ/ಕಿ ಅಥವಾ ಆರೋಗ್ಯ ಕಾರ್ಯಕರ್ತ/ರ್ತೆ ಮಕ್ಕಳಿಗೆ ಒಳ್ಳೆಯ ಅಭ್ಯಾಸಗಳನ್ನು ರೂಢಿಸುವ ನಿಟ್ಟಿನಲ್ಲಿ ಸಾರ್ವಜನಿಕ ಸಂಸ್ಥೆಯೊಂದು ಸರಾಗವಾಗಿ ನಡೆಯುವಂತೆ ಮಾಡಲು ನಿತ್ಯದ ಕೆಲಸದಲ್ಲಿಯೇ ಹೇಗೆ ಹೆಣಗುತ್ತಾರೆ ಎಂಬುದನ್ನು ಅವು ನಮಗೆ ಹೇಳುತ್ತವೆ. ಭಾಗವಹಿಸಿದವರೊಬ್ಬರು ಹೇಳಿದರು, 'ನಮ್ಮ ವಿದ್ಯಾರ್ಥಿಗಳಲ್ಲಿ ಒಳ್ಳೆಯ ಅಭ್ಯಾಸಗಳನ್ನು ಬೆಳೆಸಲು ನಾವು ಬಹಳಷ್ಟನ್ನು – ಅಂದರೆ ಮಕ್ಕಳ ಹಾಡುಗಳಿಂದ ಹಿಡಿದು ಆರೋಗ್ಯಪೂರ್ಣ ಆಹಾರಾಭ್ಯಾಸಗಳ ಕುರಿತಾದ ಪತ್ರಿಕಾ ಬರಹಗಳು, ಕಸದ ಡಬ್ಬಿಗಳನ್ನಾಗಿ ಬಳಸುವುದಕ್ಕಾಗಿ ಸ್ಥಳೀಯ ಔಷಧಿ ಮಳಿಗೆಗಳಿಂದ ಸಂಗ್ರಹಿಸಿದ ಇನ್‌ಸುಲಿನ್‌ನ ಥರ್ಮೋಕೋಲ್ ಪೆಟ್ಟಿಗೆಗಳವರೆಗೆ-ಏನೆಲ್ಲವನ್ನೂ ಬಳಸಿಕೊಳ್ಳುತ್ತೇವೆ. ಅವರಿಗೆ ಇದನ್ನು ಪದೇ ಪದೇ ಹೇಳಬೇಕಾಗುತ್ತದೆ. ಅವರು ಯೋಚಿಸುವಂತೆ, ಅರ್ಥಮಾಡಿಕೊಳ್ಳುವಂತೆ ಮಾಡಲು ನಾವು ಪುನರಾವರ್ತನೆ ಮತ್ತು ಪುನರುಚ್ಚಾರವನ್ನು ಸಾಧನವಾಗಿ ಬಳಸುತ್ತೇವೆ.

**ಸಾಹಚರ್ಯೆಯ ಸಾಮರ್ಥ್ಯದ ಬಳಕೆ**

ಈ ಉದಾಹರಣೆಗಳು ಅಸಾಧಾರಣವೇನೂ ಅಲ್ಲ. ಇವು ನಿರ್ದಿಷ್ಟ ವಿವರಗಳಲ್ಲಿ ಬೇರೆಯಾಗಿದ್ದರೂ ಆಳದಲ್ಲಿನ ಸಾರ್ವಜನಿಕ ಮನೋಧರ್ಮದಲ್ಲಿ (public spiritedness) ಒಂದೇ ಆಗಿವೆ. ಹಾಗಿದ್ದರೂ ಜಡ, ಅಪ್ರಾಮಾಣಿಕ ಅಥವಾ ಭ್ರಷ್ಟ ಸಾರ್ವಜನಿಕ ಅಧಿಕಾರಿಗಳ ಮತ್ತು ಕಾರ್ಯನಿರ್ವಾಹಕರ ಚಿತ್ರಣವು ನಮ್ಮ ಸಾರ್ವಜನಿಕ ದೃಷ್ಟಿಯನ್ನು ಆಕರ್ಷಿಸುತ್ತಲೇ ಇರುತ್ತದೆ. ಸಾರ್ವಜನಿಕ ಸಂಸ್ಥೆಯೊಂದು ಚೆನ್ನಾಗಿ ಕೆಲಸ ಮಾಡುವಂತೆ ಮಾಡಲು ಹಾಗೂ ತನ್ನ ಕಾರ್ಯಸಾಧನೆಯನ್ನು ಉತ್ತಮಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಜನ ಸಮುದಾಯವು ಸುಶಿಕ್ಷಿತವಾಗುವ, ಆಲೋಚಿಸುವ ಹಾಗೂ ಸಂಘಟಿತಗೊಳ್ಳುವ ಹಾಗೆ ಹೆಣಗುವ ಹಳ್ಳಿಯ ಶಾಲಾ ಶಿಕ್ಷಕರು ಅಥವಾ ಆಶಾ ಕಾರ್ಯಕರ್ತರಂತಹ (ASHA) ಪ್ರತಿ-ರೂಪಗಳು ಗಮನಕ್ಕೆ ಬರುವುದೇ ಕಡಿಮೆ. ಒಟ್ಟಾಗಿ ಕೆಲಸಗಳನ್ನು ಮಾಡುವ ಈ ಉಬುಂಟು ಮಾದರಿಯು ('ನಾವಿರುವುದರಿಂದ ನಾನಿದ್ದೇನೆ') ಸಾರ್ವಜನಿಕ ಕ್ರಿಯಾಚಟುವಟಿಕೆಗಳನ್ನು ಸರ್ಕಾರೀ ಕ್ರಮಗಳು ಹಾಗೂ ಗರಿಷ್ಠ ಫಲವನ್ನು ಪಡೆಯುವ ನಿಟ್ಟಿನಲ್ಲಿ ನಾವು ಮಾಡುವ ಖಾಸಗೀ ಆಯ್ಕೆಗಳಿಗಿಂತಲೂ ಭಿನ್ನವಾಗಿಸುತ್ತದೆ. ಸಾರ್ವಜನಿಕ ಸಂಸ್ಥೆಗಳು ಕುಂದುಕೊರತೆಗಳಿಂದ ಕೂಡಿವೆ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಅದಕ್ಕಾಗಿ ಅವುಗಳನ್ನು ಸರಿಪಡಿಸಬೇಕು. ತ್ಯಜಿಸುವುದಲ್ಲ. ಏಕೆಂದರೆ, ಪ್ರತಿಯೊಂದು ಸಾರ್ವಜನಿಕ ಕುಂದುಕೊರತೆಗೂ ನಾವು ಖಾಸಗೀ ಪರಿಹಾರವನ್ನು ಕಂಡುಕೊಳ್ಳಲು ಆಗುವುದಿಲ್ಲ. ಏನೇ ಇರಲಿ, ಒಂದು ವಿಶಿಷ್ಟ ಹಾಗೂ ಖಾಸಗೀ ಆಸ್ಪತ್ರೆಯನ್ನು ತಲುಪಲಾದರೂ ನಮಗೆ ಕನಿಷ್ಠ ಪಕ್ಷ ಎಲ್ಲಾ ಕಾಲಗಳಲ್ಲಿಯೂ ಸಂಚರಿಸಬಹುದಾದ ಸಾರ್ವಜನಿಕವಾಗಿ ನಿರ್ವಹಿಸಲ್ಪಡುವ ರಸ್ತೆ ಮಾರ್ಗಗಳ ಅಗತ್ಯವಿದೆ! ಹಲವಾರು ಮೂಲಭೂತ ಸೇವೆಗಳನ್ನು ಒಬ್ಬೊಬ್ಬ ವ್ಯಕ್ತಿಯೂ ವಿಶೇಷವಾಗಿ ಅನುಭವಿಸುವುದಲ್ಲ ಅವುಗಳನ್ನು ಎಲ್ಲರೂ ಹಂಚಿಕೊಳ್ಳಬೇಕು ಎಂಬುದೇ ಪರಮ ಸತ್ಯ. ಸರಳವಾಗಿ ಹೇಳಬೇಕೆಂದರೆ, ಸಾರ್ವಜನಿಕ ಹಿತಗಳನ್ನು ಸಾರ್ವಜನಿಕವಾಗಿಯೇ ಒದಗಿಸಬೇಕು ಮತ್ತು ಅವು ಸುಸ್ಥಿರವಾಗಿರುವಂತೆ ನೋಡಿಕೊಳ್ಳಬೇಕು, ಸಾರ್ವಜನಿಕ ಅಹಿತಗಳು ಸಾಮೂಹಿಕ ನಿಯಂತ್ರಣಕ್ಕೆ ಒಳಪಡಬೇಕು. ಸಾರ್ವಜನಿಕ ಪರಿಹಾರವನ್ನು ಒಟ್ಟಾಗಿ ಕಂಡುಕೊಳ್ಳುವುದೇ ಒಂದು ಸಂಪನ್ಮೂಲ: ಅದು ಜನರು ಒಬ್ಬರಿಂದ ಮತ್ತೊಬ್ಬರು ಕಲಿಯುವಂತೆ ಮಾಡುವುದರ ಮೂಲಕ ಮತ್ತು ಪರಸ್ಪರ ಸಂಬಂಧಿತ, ಸಹಚರ್ಯೆಯ ಶಕ್ತಿ ಸಾಮರ್ಥ್ಯಗಳಿಂದ ಬಲವರ್ಧಿಸಿಕೊಳ್ಳುವಂತೆ ಮಾಡುವ ಮೂಲಕ ಅವರನ್ನು ಒಂದಾಗಿಸುತ್ತದೆ.

ಈ ಘಟ್ಟದಲ್ಲಿ ಸಾರ್ವಜನಿಕ ಮೌಲ್ಯಗಳನ್ನು ಸಾಮೂಹಿಕವಾಗಿ ಕಂಡುಕೊಳ್ಳುವುದರ ಭರವಸೆಯ ವಿರುದ್ಧ ಸಾಧಾರಣವಾಗಿ ಎರಡು ಸಂದೇಹಗಳು ಕಾಣಿಸಿಕೊಳ್ಳುವ ಸಾಧ್ಯತೆಯಿದೆ: ನಾವು ಇಂತಹ ಉಪಕ್ರಮಗಳನ್ನು ಹೆಚ್ಚಿಸಬಲ್ಲೆವೆ? ಹಾಗೂ ನಾವು ಅವುಗಳನ್ನು ಸಾಧ್ಯತೆಗಳ ಮಾನದಂಡಗಳ

ಒಳಗೇ ಹೊಂದಿಸಬಹುದೇ? ಈ ಪ್ರಶ್ನೆಗಳಿಗೆ ಉತ್ತರಗಳು ಸ್ಪಷ್ಟವಾಗಿಯೂ ಇಲ್ಲ, ಸರಳವಾಗಿಯೂ ಇಲ್ಲ. ಆದರೆ ಅವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವೇನಲ್ಲ. ಮೊದಲನೆಯದಾಗಿ, ಕಾರ್ಯಾಗಾರದಲ್ಲಿ ನಡೆದ ಚರ್ಚೆಗಳಿಂದ ತಿಳಿದುಬಂದಿದ್ದೆಂದರೆ, ಅನೇಕ ತಳ-ಮಟ್ಟದ ಸಾರ್ವಜನಿಕ ಕಾರ್ಯನಿರ್ವಾಹಕರಿಗೆ ಸದ್ಯದ ಮಿತಿಗಳಾಚೆಗೂ ಊಹಿಸುವ ಸಾಮರ್ಥ್ಯ ಇದೆ ಎನ್ನುವುದು. ಅವುಗಳನ್ನು ಸಾಧಿಸುವುದು ಕಷ್ಟ ಎಂಬುದನ್ನು ತಿಳಿದೂ ಅವರು ಹಾಗೆ ಮಾಡಬಲ್ಲರು. ಮುಖ್ಯೋಪಾಧ್ಯಾಯರೊಬ್ಬರು ಶೌಚಾಲಯ ಬಳಕೆಯ ಸಮಸ್ಯೆಯನ್ನು ಕುರಿತು ಧನಾತ್ಮಕವಾಗಿ ಆದರೂ ವಾಸ್ತವಿಕತೆಯ ಧ್ವನಿಯಲ್ಲಿ ಮಾತನಾಡಿದರು, ಸೀಮಿತವಾದ ಮೂಲಸೌಕರ್ಯ ಹಾಗೂ ಇತರ ಸಂಪನ್ಮೂಲಗಳಿದ್ದರೂ ನಾವು ಈ ತುರ್ತು ಸಾಮಾಜಿಕ ಸಮಸ್ಯೆಗಳ ಕುರಿತು ಕಾರ್ಯಪ್ರವೃತ್ತರಾಗಬೇಕು. ಎಲ್ಲವೂ ಸರಿಯಾಗಿದ್ದಾಗ ಮಾತ್ರ ಕಾರ್ಯಪ್ರವೃತ್ತರಾಗಲು ಸರಿಯಾದ ಸಮಯ ಎಂದು ನಾವು ಭಾವಿಸಿದರೆ ಎಂದೂ ಏನನ್ನೂ ಮಾಡಲು ಸಾಧ್ಯವೇ ಇಲ್ಲ. ಇಂತಹದೊಂದು ವಿವೇಕಯುತವಾದ ಮತ್ತು ಸರಳವಾದ ವಿಧಾನವು ನಿಶ್ಚಿತವಾಗಿಯೂ ಸಾಧ್ಯತೆಯ, ಸಂಭವನೀಯತೆಯ ಪರಿಮಿತಿಯೊಳಗೇ ಬರುತ್ತದೆ.

ಎರಡನೆಯದಾಗಿ, ಭರವಸೆದಾಯಕ ಪ್ರಯತ್ನಗಳು ಸ್ಥಳೀಯವಾಗಿರುವುದರ ಜೊತೆಗೆ ಅವುಗಳ ಪ್ರತಿರೂಪಗಳು ಅಸಾಧ್ಯ ಎಂಬ ಆರೋಪಕ್ಕೆ ಪ್ರತಿಯಾಗಿ ನಾವು ಮಾರ್ಗರೆಟ್ ಮೀಡ್‌ರವರ ಆಳ ಗ್ರಹಿಕೆಯ ಮಾತುಗಳನ್ನು ನೆನಪಿಸಿಕೊಳ್ಳುತ್ತಿದ್ದೇವೆ. ಸಣ್ಣ ಗುಂಪೊಂದು ಪ್ರಪಂಚವನ್ನು ಬದಲಾಯಿಸಬಲ್ಲದು ಎನ್ನುವುದನ್ನು ಎಂದೂ ಸಂದೇಹಿಸಬೇಡಿ. ನಿಜಕ್ಕೂ ಬದಲಾವಣೆ ಆಗುವುದಿದ್ದರೆ ಅದರಿಂದಲೇ. ಇಲ್ಲಿ ಯಾರ ಧ್ವನಿಯನ್ನು ದಾಖಲಿಸಲಾಗಿದೆಯೋ ಆ ಜನರು ಇತರರ ಬದುಕಿನಲ್ಲಿ ಬದಲಾವಣೆಯೊಂದನ್ನು ತರುವುದಕ್ಕಾಗಿ ತಮ್ಮ ಕಾರ್ಯಕ್ಷೇತ್ರದಲ್ಲಿ ದಿನನಿತ್ಯವೂ ಕ್ರಿಯಾಶೀಲತೆಯನ್ನು ಬಿತ್ತಿ, ಉಳಿಸಿಕೊಂಡು ಬರುತ್ತಿದ್ದಾರೆ. ಇದೊಂದು ತರದಲ್ಲಿ ಆಡಮ್ ಸ್ಮಿತ್ ವರ್ಣಿಸಿದ 'ಸಾಮಾಜಿಕ ಉತ್ಕಟ ಭಾವ' ವನ್ನು ಹೆಚ್ಚಿಸಿದ ಹಾಗೆ-ಎಲ್ಲರನ್ನೂ ಭಾಧಿಸುತ್ತಿರುವ ಸಂಕಟವನ್ನು ನಿಭಾಯಿಸಲು ಸಾಮೂಹಿಕ ಪ್ರಯತ್ನಗಳನ್ನು ಹೆಚ್ಚಿಸುವುದು ಮತ್ತು ಆಳಗೊಳಿಸುವುದು.

ಮಾನಬಿ ಮಜುಂದಾರ್ ಮತ್ತು ಕುಮಾರ ರಾಣಾ ಇಬ್ಬರೂ ಕೋಲ್ಕೊತ್ತಾದ ಪ್ರತೀಚಿ ಸಂಸ್ಥೆಗೆ ಸೇರಿದವರು. ಮಜುಂದಾರ್ ಅವರು ಕೋಲ್ಕೊತ್ತಾದ ಸೆಂಟರ್ ಫಾರ್ ಸ್ಟಡೀಸ್ ಇನ್ ಸೋಷಿಯಲ್ ಸೈನ್ಸ್ ನಲ್ಲಿ ಬೋಧನೆಯನ್ನು ಕೂಡ ಮಾಡುತ್ತಾರೆ. ಅವರ ಸಂಶೋಧನಾ ಆಸಕ್ತಿಯು ಶಿಕ್ಷಣದ ರಾಜಕೀಯ( ಶಿಕ್ಷಣದಲ್ಲಿನ ರಾಜಕಾರಣದ) ಸಮಸ್ಯೆಗಳು, ಸಾರ್ವಜನಿಕ ಆರೋಗ್ಯದ ರಾಜಕಾರಣ, ಸ್ಥಳೀಯ ಪ್ರಜಾತಂತ್ರಾತ್ಮಕ ರಾಜಕಾರಣಗಳನ್ನು ಒಳಗೊಂಡಿದೆ. ರಾಣಾ ಅವರ ಸಂಶೋಧನಾ ಆಸಕ್ತಿಯು ಶಿಕ್ಷಣ, ಆರೋಗ್ಯ ಮತ್ತು ಪೌಷ್ಟಿಕತೆಗಳಂತಹ ಮಾನವಿಕ ಸಾಮರ್ಥ್ಯಗಳ ಜೊತೆಗೆ ಹಳ್ಳಿಗಳ ಅಧ್ಯಯನ ಹಾಗೂ ಟಚಿಡಿರುಟಚಿಟುಣಡಿ ಅಧ್ಯಯನವನ್ನೂ ಒಳಗೊಂಡಿದೆ. ಇವರು ಪ್ರಬಂಧ, ಸಣ್ಣಕತೆ ಮತ್ತು ಸಾರ್ವಜನಿಕ ವಿವರಣೆ, ವ್ಯಾಖ್ಯಾನಗಳನ್ನು ಮುದ್ರಣ ಮಾಧ್ಯಮದಲ್ಲಿ ನಿಯಮಿತವಾಗಿ ಪ್ರಕಟಿಸುತ್ತ ಬಂದಿದ್ದಾರೆ. ಮಾನಬಿಯವರನ್ನು manabimajumdar@gmail.com, ಮೂಲಕ ಹಾಗೂ ಕುಮಾರ ರಾಣಾ ಅವರನ್ನು k.rana7@gmail.com. ಮೂಲಕ ಸಂಪರ್ಕಿಸಬಹುದು.